# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 700 (802)
2. ಮಾನ್ಯ ಸದಸ್ಯರ ಹೆಸರು : ಶ್ರೀ ಎಂ. ನಾರಾಯಣಸ್ವಾಮಿ
3. ಉತ್ತರಿಸಬೇಕಾದ ದಿನಾಂಕ : 20.12.2021.
4. ಉತ್ತರಿಸಬೇಕಾದ ಸಚಿವರು : ಪ್ರವಾಸೋದ್ಯಮ ಹಾಗೂ ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು.

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯಾದ್ಯಾಂತ ಬೆಂಗಳೂರು ಸೇರಿ ಎಲ್ಲಾ ಕಡೆ ಮಿತಿಮೀರಿ ಪ್ಲಾಸ್ಟಿಕ್ ಬಳಕೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಪ್ಲಾಸ್ಟಿಕ್ ಬದಲಾಗಿ ಪರ್ಯಾಯ ಮಾರ್ಗಗಳನ್ನು ಸರ್ಕಾರ ಕಂಡುಕೊಂಡಿದೆಯೇ; (ಈ ಬಗ್ಗೆ ಮಾಹಿತಿ ನೀಡುವುದು) | ಹೌದು. ಸರ್ಕಾರದ ಗಮನಕ್ಕೆ ಬಂದಿದೆ.<br>ಪ್ಲಾಸ್ಟಿಕ್ ಬದಲಾಗಿ ಕಾಂಪೋಸ್ಟಬಲ್ ಪಾಲಿಮರ್ ಹಾಗೂ ಪ್ಲಾಸ್ಟಿಕ್ ರಹಿತ ವಸ್ತುಗಳಿಂದ ತಯಾರಿಸಿದ ಉತ್ಪನ್ನಗಳು ಮಾರುಕಟ್ಟೆಯಲ್ಲಿ (ಇತ್ತೀಚಿನ ದಿನಗಳಲ್ಲಿ) ಲಭ್ಯವಿದ್ದು, ಸದರಿ ಉತ್ಪನ್ನಗಳನ್ನು ತಯಾರಿಸುವ ಕಾರ್ಖಾನೆಗಳನ್ನು ಪ್ರೋತ್ಸಾಹಿಸಲಾಗುತ್ತಿದೆ.<br>ಪ್ಲಾಸ್ಟಿಕ್ ನಿಷೇಧಿಸಿರುವ ಬಗ್ಗೆ ಮತ್ತು ಪ್ಲಾಸ್ಟಿಕ್‌ನ ಪರ್ಯಾಯ ವಸ್ತುಗಳನ್ನು ಬಳಕೆ ಮಾಡುವಂತೆ ಸಾರ್ವಜನಿಕರಲ್ಲಿ ಅರಿವು ಮೂಡಿಸಲು ವ್ಯಾಪಕವಾಗಿ ಚಟುವಟಿಕೆಗಳನ್ನು ಕೈಗೊಳ್ಳುವಂತೆ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳಿಗೆ ಪೌರಾಡಳಿತ ನಿರ್ದೇಶನಾಲಯದಿಂದ ಸೂಚನೆಗಳನ್ನು ನೀಡಲಾಗಿರುತ್ತದೆ. |
| (ಆ) | ಎಲ್ಲೆಂದರಲ್ಲಿ ಪ್ಲಾಸ್ಟಿಕ್ ಗುಡ್ಡೆ ಗುಡ್ಡೆಯಾಗಿ ಬಿದ್ದಿರುವುದು, ಇದು ಪರಿಸರಕ್ಕೆ ಮತ್ತು ಜನರ ಆರೋಗ್ಯದ ಮೇಲೆ ದುಷ್ಪರಿಣಾಮ ಬೀಳುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇದನ್ನು ತಡೆಗಟ್ಟಲು ಸರ್ಕಾರ ಕೈಗೊಂಡ ಕ್ರಮಗಳೇನು; | ಹೌದು. ಸರ್ಕಾರದ ಗಮನಕ್ಕೆ ಬಂದಿದೆ.<br>ಸರ್ಕಾರದ ಅಧಿಸೂಚನೆ ಸಂಖ್ಯೆ: ಅಪಜೀ 17 ಇಪಿಸಿ 2012 ರನ್ವಯ ರಾಜ್ಯದಲ್ಲಿ ದಿನಾಂಕ 11-03-2016 ರಿಂದ ಪ್ಲಾಸ್ಟಿಕ್ ನಿಷೇಧ ಅಧಿಸೂಚನೆ ಜಾರಿಗೆ ಬಂದಿದ್ದು, ಇದರಡಿಯಲ್ಲಿ ಪ್ಲಾಸ್ಟಿಕ್ ಕ್ಯಾರಿಬ್ಯಾಗ್, ಪ್ಲಾಸ್ಟಿಕ್ ಭಿತ್ತಿಪತ್ರ, ಪ್ಲಾಸ್ಟಿಕ್ ತೋರಣ, ಫ್ಲೆಕ್ಸ್, ಪ್ಲಾಸ್ಟಿಕ್ ಬಾವುಟ, ಪ್ಲಾಸ್ಟಿಕ್ ತಟ್ಟೆ, ಪ್ಲಾಸ್ಟಿಕ್ ಲೋಟ, ಪ್ಲಾಸ್ಟಿಕ್ ಚಮಚ, ಕ್ಲಿಂಗ್ ಫಿಲ್ಮ್ ಮತ್ತು ಊಟದ ಮೇಜಿನ ಮೇಲೆ ಹರಡುವ ಪ್ಲಾಸ್ಟಿಕ್ ಹಾಳೆ ಹಾಗೂ ಥರ್ಮೋಕೋಲ್ ಮತ್ತು ಪ್ಲಾಸ್ಟಿಕ್ ಮೈಕ್ರೋಬೀಡ್ಸ್‌ನಿಂದ ತಯಾರಾದಂತಹ ಮೇಲ್ಕಂಡ ವಸ್ತುಗಳ ಬಳಕೆ ಉತ್ಪಾದನೆ, ವಿತರಣೆ ಮತ್ತು ಸರಬರಾಜನ್ನು ಮಾಡುವುದನ್ನು ರಾಜ್ಯಾದ್ಯಂತ ನಿಷೇಧಿಸಲಾಗಿದೆ.<br>ಅಲ್ಲದೆ, ಸದರಿ ವಸ್ತುಗಳನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಸುತ್ತೋಲೆ ಸಂಖ್ಯೆ: ಆ/ಪಿಆರ್/774/2016-17, ದಿನಾಂಕ: 04-05-2016 ರಲ್ಲಿ ನಿಷೇಧಿಸಿ ಆದೇಶಿಸಲಾಗಿರುತ್ತದೆ. |

| | | |
|---|---|---|
| | | ಅಲ್ಲದೆ, ಪೌರಾಡಳಿತ ನಿರ್ದೇಶನಾಲಯದಿಂದ ಕೆಳಕಂಡಂತೆ ಕ್ರಮವಹಿಸಲಾಗುತ್ತಿದೆ.<br>1) ನಗರ ವ್ಯಾಪ್ತಿಯಲ್ಲಿ ಉತ್ಪಾದನೆಯಾಗುತ್ತಿರುವ ತ್ಯಾಜ್ಯವನ್ನು ಮೂಲದಲ್ಲಿಯೇ ಹಸಿ ಮತ್ತು ಒಣ ತ್ಯಾಜ್ಯವನ್ನಾಗಿ ಸಂಗ್ರಹಿಸಿ, ಹಸಿ ಕಸವನ್ನು ವಿಂಡ್ರೋ ತಂತ್ರಜ್ಞಾನದ ಮೂಲಕ ಗೊಬ್ಬರವನ್ನಾಗಿಸಲು ಕ್ರಮವಹಿಸುವುದು.<br>2) ಸಂಗ್ರಹಿಸಿದ ಒಣ ತ್ಯಾಜ್ಯವನ್ನು ಮತ್ತೊಮ್ಮೆ ವಿಂಗಡಿಸಿ ವಿವಿಧ ರೂಪದ ಪ್ಲಾಸ್ಟಿಕ್ ತ್ಯಾಜ್ಯವಸ್ತುಗಳನ್ನು ಅಂದರೆ ಪುನರ್ ಬಳಕೆಯಾಗುವ ಪುನರ್ಬಳಕೆಯಾಗದ ದಹನ ಯೋಗ್ಯವಾದ ತ್ಯಾಜ್ಯ, ನಿಸತ್ವ ತ್ಯಾಜ್ಯಗಳನ್ನಾಗಿ ವಿಂಗಡಿಸುವುದು.<br>3) ದಹನ ಯೋಗ್ಯ ತ್ಯಾಜ್ಯವನ್ನು ಒಟ್ಟು (Bale) ಮಾಡಿ ಹತ್ತಿರದ ಸಿಮೆಂಟ್ ಕಾರ್ಖಾನೆಗಳಿಗೆ ಪರ್ಯಾಯ ಇಂಧನವಾಗಿ ಬಳಕೆ ಮಾಡಲು ಕ್ರಮ ವಹಿಸುವುದು.<br>4) ಒಣ ಕಸ ನಿರ್ವಹಣೆಗಾಗಿ ನಗರ ಸ್ಥಳೀಯ ಸಂಸ್ಥೆಗಳಲ್ಲಿ dry waste collection centers/ Material recovery facility ಗಳನ್ನು ಅಭಿವೃದ್ಧಿ ಪಡಿಸಲು ಇದುವರೆಗೆ 248 ಘಟಕಗಳನ್ನು ಸ್ಥಾಪಿಸಲಾಗಿದ್ದು, ಸ್ವಚ್ಛ ಭಾರತ ಮಿಷನ್ ಯೋಜನೆಯಡಿ ಅಂದಾಜು 88 ಘಟಕಗಳನ್ನು ಸ್ಥಾಪಿಸಲು ಕ್ರಮ ಕೈಗೊಳ್ಳಲಾಗಿರುತ್ತದೆ.<br>5) ಪ್ರಸ್ತುತ ಸಾಲಿನಲ್ಲಿ 1512 ಟನ್ ಪ್ಲಾಸ್ಟಿಕ್ ತ್ಯಾಜ್ಯವನ್ನು ಸಿಮೆಂಟ್ ಕಾರ್ಖಾನೆಗಳಿಗೆ ರವಾನಿಸಲಾಗಿರುತ್ತದೆ ಹಾಗೂ 33.57 ಟನ್ ಪ್ಲಾಸ್ಟಿಕ್ ತ್ಯಾಜ್ಯವನ್ನು ರಸ್ತೆ ಡಾಂಬರೀಕರಣಕ್ಕೆ ಉಪಯೋಗಿಸಲಾಗಿರುತ್ತದೆ. |
| (ಇ) | ಈ ಪ್ಲಾಸ್ಟಿಕ್ ಮರು ಬಳಕೆ ಮಾಡಿದ್ದರೆ ಪರಿಸರದ ಮೇಲೆ ಬೀಳುವ ದುಷ್ಪರಿಣಾಮ ಕಡಿಮೆಯಾಗುತ್ತದೆಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಮರು ಬಳಕೆ ಮಾಡಲು ಸರ್ಕಾರ ನಿರ್ಧಾರ ತೆಗೆದುಕೊಳ್ಳದಿರಲು ಕಾರಣಗಳೇನು; | ಹೌದು. ಸರ್ಕಾರದ ಗಮನಕ್ಕೆ ಬಂದಿದೆ.<br>ಘನ ತ್ಯಾಜ್ಯ ವಸ್ತುಗಳ ನಿರ್ವಹಣೆ ನಿಯಮ 2016 ಹಾಗೂ ಘನತ್ಯಾಜ್ಯ ನಿರ್ವಹಣೆ ರಾಜ್ಯ ನೀತಿ ಮತ್ತು ಕಾರ್ಯತಂತ್ರ 2020ರಲ್ಲಿ ತ್ಯಾಜ್ಯದ ಪ್ರಮಾಣ ಕಡಿತಗೊಳಿಸಲು, ಪುನರ್ಬಳಕೆ ಮತ್ತು ರೀಸೈಕಲ್ ಮಾಡಲು ಈಗಾಗಲೇ ಒತ್ತು ನೀಡಲಾಗಿದ್ದು, |

| | | |
|---|---|---|
| | (ಮಾಹಿತಿ ನೀಡುವುದು) | 2025ರೊಳಗಾಗಿ ಒಟ್ಟು ತ್ಯಾಜ್ಯ ಉತ್ಪಾದನೆಯ ಪೈಕಿ ಶೇ 30 ಕ್ಕಿಂತ ಕಡಿಮೆ ತ್ಯಾಜ್ಯವನ್ನು ನೆಲಭರ್ತಿ ಸೌಲಭ್ಯಕ್ಕೆ ಸಾಗಿಸುವ ಗುರಿಯನ್ನು ಹೊಂದಲಾಗಿರುತ್ತದೆ.<br>ನಗರದ ಒಣ ತ್ಯಾಜ್ಯ ಸಂಗ್ರಹಣಾ ಕೇಂದ್ರಗಳಲ್ಲಿ ವಿಂಗಡಿಸಿದ ಮನರ್ಬಳಕೆಯಾಗುವ ತ್ಯಾಜ್ಯವನ್ನು ಅಧಿಕೃತ plastic recyclers ರವರಿಗೆ ಮಾರಾಟ ಮಾಡಲು ಸೂಚನೆ ನೀಡಲಾಗಿರುತ್ತದೆ. ಈ ನಿಟ್ಟಿನಲ್ಲಿ ಪ್ರತಿ ದಿನ 225 ಟನ್ ಮನರ್ಬಳಕೆಯಾಗುವ ತ್ಯಾಜ್ಯವನ್ನು ಅಧಿಕೃತ recyclers ರವರಿಗೆ ಮಾರಾಟ ಮಾಡಲಾಗುತ್ತಿದೆ.<br>ಮುಂದುವರೆದು reduce, Reuse, Recycle ಪರಿಕಲ್ಪನೆ ಬಗ್ಗೆ ಸಾರ್ವಜನಿಕರಲ್ಲಿ ಅರಿವು ಮೂಡಿಸುವ ಸಲುವಾಗಿ ಪ್ರಮುಖ ನಗರಗಳಲ್ಲಿ ಜನಜಾಗೃತ ಫಲಕಗಳನ್ನು ಅಳವಡಿಸಲು ಕಾರ್ಯಾದೇಶ ನೀಡಲಾಗಿರುತ್ತದೆ.<br>ರಾಜ್ಯದಲ್ಲಿ ಉತ್ಪತ್ತಿಯಾಗುವ ಪ್ಲಾಸ್ಟಿಕ್ ತ್ಯಾಜ್ಯದ ನಿರ್ವಹಣೆಗೆ ಪ್ಲಾಸ್ಟಿಕ್ ತ್ಯಾಜ್ಯ ನಿರ್ವಹಣೆ ನಿಯಮಗಳು, 2016ರ ನಿಯಮ 5(ಎ) ಪ್ರಕಾರ, ಮರುಬಳಕೆ ಮಾಡಬಹುದಾದ ಪ್ಲಾಸ್ಟಿಕ್ ತ್ಯಾಜ್ಯವನ್ನು ನೋಂದಾಯಿತ ಪ್ಲಾಸ್ಟಿಕ್ ತ್ಯಾಜ್ಯ ಮರುಬಳಕೆದಾರರಿಗೆ ವರ್ಗಾಯಿಸಬೇಕು. ಪ್ಲಾಸ್ಟಿಕ್ ತ್ಯಾಜ್ಯ ನಿರ್ವಹಣೆ ನಿಯಮಗಳ ನಿಯಮ 13(5)ರ ಪ್ರಕಾರ, ಪ್ಲಾಸ್ಟಿಕ್ ತ್ಯಾಜ್ಯ ಮರುಬಳಕೆದಾರರನ್ನು ಸಂಬಂಧಪಟ್ಟ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಲ್ಲಿ ನೋಂದಾಯಿಸಬೇಕು. ರಾಜ್ಯದಲ್ಲಿ 111 ನೋಂದಾಯಿತ ಮರುಬಳಕೆದಾರರಿದ್ದು (Plastic Recyclers), ಅವರಿಂದ 1.70 ಲಕ್ಷ ಟನ್ ಪ್ಲಾಸ್ಟಿಕ್ ತ್ಯಾಜ್ಯವನ್ನು ಮರುಬಳಕೆ ಮಾಡುತ್ತಿದೆ. |
| (ಈ) | ಬೀದಿ ಬದಿಯ ವ್ಯಾಪಾರಿಗಳ ಬಳಿ ಪ್ಲಾಸ್ಟಿಕ್ ಕವರ್ ಬಳಸುತ್ತಾರೆಂದು ಸಾವಿರ ಸಾವಿರ ದಂಡ ವಸೂಲಿ ಮಾಡುವ ಸರ್ಕಾರ ಈ ಪ್ಲಾಸ್ಟಿಕ್ ಕವರನ್ನು ಉತ್ಪಾದಿಸುವ ಕಾರ್ಖಾನೆಗಳಿಗೆ ದಂಡವಿಧಿಸಿ ಅವನ್ನು ಮುಚ್ಚಿಸಬಹುದಲ್ಲವೇ? | ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಇದುವರೆವಿಗೂ ನಿಷೇಧಿಸಲಾದ ಹಾಗೂ ಅನಧಿಕೃತ ಪ್ಲಾಸ್ಟಿಕ್ ಉತ್ಪಾದಿಸುವ ಒಟ್ಟು 111 ಘಟಕಗಳಿಗೆ ಮುಚ್ಚುವ ಆದೇಶವನ್ನು ನೀಡಲಾಗಿರುತ್ತದೆ. |
| (ಉ) | ಇದುವರೆವಿಗೂ ಪ್ಲಾಸ್ಟಿಕ್ ಕವರ್ ಉತ್ಪಾದಿಸುವ ಎಷ್ಟು ಕಾರ್ಖಾನೆಗಳ ವಿರುದ್ಧ ಯಾವ ರೀತಿಯ ಕ್ರಮಕೈಗೊಳ್ಳಲಾಗಿದೆ; ಎಷ್ಟು ದಂಡ ವಸೂಲಿ ಮಾಡಲಾಗಿದೆ; (ಸಂಪೂರ್ಣ ಮಾಹಿತಿ ನೀಡುವುದು) | ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯು ಇದುವರೆವಿಗೂ ಅನಧಿಕೃತ ಪ್ಲಾಸ್ಟಿಕ್ ಅನ್ನು ಉತ್ಪಾದಿಸುವ ಒಟ್ಟು 111 ಘಟಕಗಳಿಗೆ ಮುಚ್ಚುವ ಆದೇಶವನ್ನು ನೀಡಲಾಗಿದೆ. 56 ಘಟಕಗಳ ಮುಚ್ಚುವ ಆದೇಶವು ಚಾಲ್ತಿಯಲ್ಲಿರುತ್ತದೆ ಹಾಗೂ 55 ಘಟಕಗಳ |

| | | |
|---|---|---|
| | | ಮುಚ್ಚುವ ಆದೇಶವನ್ನು ತೆರವುಗೊಳಿಸಲಾಗಿದೆ. ಸದರಿ ಘಟಕಗಳಿಗೆ ದಂಡ ವಿಧಿಸುವ ಅಧಿಕಾರವಿರುವುದಿಲ್ಲ. |
| (ಊ) | ಎಲ್ಲಾ ಅಂಗಡಿಗಳಲ್ಲಿ ಕುರ್‌ಕುರೆ, ಚಿಪ್ಸ್, ಗುಟಕಾ ತಿನ್ನುವ ಪದಾರ್ಥಗಳನ್ನು ಪ್ಲಾಸ್ಟಿಕ್ ಕವರ್‌ನಿಂದಲೇ ಪ್ಯಾಕ್ ಮಾಡುತ್ತಿದ್ದು, ಅಂತವರ ವಿರುದ್ಧ ಸರ್ಕಾರ ಯಾವ ಕ್ರಮ ಕೈಗೊಳ್ಳಲಾಗಿದೆ? | ರಾಜ್ಯದಲ್ಲಿ ಪ್ಲಾಸ್ಟಿಕ್‌ನಿಂದ ಉತ್ಪಾದಿಸುತ್ತಿದ್ದ ನಾಲ್ಕು ಗುಟಕಾ ಘಟಕಗಳಿಗೆ ಈಗಾಗಲೇ ಕೇಂದ್ರ ಮಾಲಿನ್ಯ ನಿಯಂತ್ರಣ ಮಂಡಳಿಯು ಈ ಕೆಳಕಂಡಂತೆ ದಂಡವನ್ನು ವಿಧಿಸಿರುತ್ತದೆ.<br>1. ಆರ್.ಕೆ ಪ್ರಾಡಕ್ಟ್ಸ್, ಬೀದರ್–ರೂ.16,08,000/-<br>2. ಸಿದ್ದು ಪ್ಯಾಕೇಜಿಂಗ್, ಚಿತ್ರದುರ್ಗ – ರೂ.54,75,000/-<br>3. ಗೋದಾವತ್ ಪ್ಯಾಕರ್ಸ್, ಧಾರವಾಡ – ರೂ.45,000/-<br>4. ಗೋದಾವತ್ ಫ್ರೆಶ್‌ನರ್ ಎಲ್‌ಎಲ್‌ಪಿ., ಧಾರವಾಡ –ರೂ.8,30,000/-<br>ಕುರ್‌ಕುರೆ, ಚಿಪ್ಸ್, ಈ ತರಹದ ಉತ್ಪನ್ನಗಳನ್ನು ಪ್ಯಾಕ್ ಮಾಡಲು Multi Layered Plastic (MLP) ನಿಂದ ತಯಾರಿಸಿದ ಪ್ಲಾಸ್ಟಿಕ್‌ಅನ್ನು ಉಪಯೋಗಿಸುತ್ತಿದ್ದು, ಸದರಿ MLP ತ್ಯಾಜ್ಯವನ್ನು ಸಿಮೆಂಟ್ ಉತ್ಪಾದನಾ ಘಟಕಗಳಲ್ಲಿ Alternative Fuel Resources (AFR) ಆಗಿ ಉಪಯೋಗಿಸಲಾಗುತ್ತಿದೆ. |

ಸಂಖ್ಯೆ: ಅಪಜೀ 87 ಇಎನ್‌ಜಿ 2021

(ಆನಂದ್ ಸಿಂಗ್)
ಪ್ರವಾಸೋದ್ಯಮ ಹಾಗೂ ಪರಿಸರ
ಮತ್ತು ಜೀವಿಪರಿಸ್ಥಿತಿ ಸಚಿವರು.